# ಮನೋವಿಜ್ಞಾನದ ಶಾಖೆಗಳು

ಇಂದಿರಾ ಜೈಪ್ರಕಾಶ್

ಮಾನವರ ಮತ್ತು ಪ್ರಾಣಿಗಳ ವರ್ತನೆ, ಅದಕ್ಕೆ ಸಂಬಂಧಿಸಿದ ದೈಹಿಕ-ಮಾನಸಿಕ ಪ್ರಕಿಯೆಗಳ ಪಾಂಡಿತ್ಯಪೂರ್ಣ ಅಧ್ಯಯನ ಮತ್ತು ಅದಕ್ಕೆ ಸಂಬಂಧಿಸಿದ ವೃತ್ತಿಯನ್ನು ಮನೋವಿಜ್ಞಾನ ಎಂದು ಕರೆಯಲಾಗಿದೆ. ಪ್ರಾಣಿಗಳನ್ನು ಅಧ್ಯಯನ ಮಾಡಿದರೂ, ಮನೋವಿಜ್ಞಾನದ ಕೇಂದ್ರಬಿಂದು ಮಾನವನ ವರ್ತನೆಯಾಗಿದೆ. ಈ ವ್ಯಾಖ್ಯೆಯಿಂದಲೇ ಈ ವಿಷಯ ಬಹಳ ವಿಸ್ತಾರವಾದದ್ದು ಎಂದು ತಿಳಿಯುತ್ತದೆ. ಈ ಕ್ಷೇತ್ರ ಬೆಳೆಯುತ್ತಾ ಬಂದಂತೆ ಹೊಸ ಹೊಸ ವಿಷಯಗಳು ಸೇರ್ಪಡೆಯಾಗಿ ಅನೇಕ ಹೊಸ ಶಾಖೆಗಳು ಹುಟ್ಟಿಕೊಂಡವು. ಇವುಗಳ ಪರಿಚಯ ಮಾಡುವ ಮುನ್ನ **ಅನ್ವಯಿಕ ಮನೋವಿಜ್ಞಾನ**ದ ಬಗ್ಗೆ ಸ್ಪಷ್ಟಪಡಿಸಬೇಕಾಗುತ್ತದೆ.

ಅನ್ವಯಿಕ ಮನೋವಿಜ್ಞಾನ ಎಂದರೆ ಒಂದೇ ವಿಷಯವನ್ನು ಕೇಂದ್ರವಾಗಿಟ್ಟುಕೊಂಡಿರುವ ಕ್ಷೇತ್ರವಲ್ಲ. ಜ್ಞಾನ ಸಂಪಾದನೆಗೆ ಮಾತ್ರ ಅಧ್ಯಯನವನ್ನು ಮೀಸಲಾಗಿಡದೆ, ಅದನ್ನು ಉಪಯೋಗಿಸಿದಾಗ ಅದು ಅನ್ವಯಿಕ ಮನೋವಿಜ್ಞಾನವಾಗುತ್ತದೆ. ಮನೋವಿಜ್ಞಾನದ ಜ್ಞಾನ, ಆ ಕ್ಷೇತ್ರದ ಸಂಶೋಧನೆಯಿಂದ ದೊರೆತ ಮಾಹಿತಿಗಳನ್ನು ದಿನ ನಿತ್ಯದ ಜೀವನದ ಸಮಸ್ಯೆಗಳ ಪರಿಹಾರಕ್ಕೆ ಉಪಯೋಗಿಸುವುದನ್ನು ಅನ್ವಯಿಕತೆ ಎನ್ನುತ್ತಾರೆ. ಕ್ರಮಬದ್ಧವಾಗಿ ಯಾವುದೇ ಮನೋವಿಜ್ಞಾನದ ಶಾಖೆಯ ವಿಷಯವನ್ನು ವೈಯಕ್ತಿಕ, ಸಾಂಘಿಕ, ಸಾಮಾಜಿಕ ಜೀವನದಲ್ಲಿ ಉಪಯೋಗಿಸಿದಾಗ ಅದು ಅನ್ವಯಿಕ ಮನೋವಿಜ್ಞಾನ ಎನಿಸಿಕೊಳ್ಳುತ್ತದೆ. ಮನೋವಿಜ್ಞಾನವನ್ನು ಬಳಸುವವರು ಪರಾಮರ್ಶಕರಿರಬಹುದು, ನೈದಾನಿಕ ಮನೋವಿಜ್ಞಾನಿಗಳಿರಬಹದು, ಆರೋಗ್ಯ, ಕ್ರೀಡೆ, ಕೈಗಾರಿಕೆ, ಶಾಲೆ, ಅಪರಾಧ ಪತ್ತೆ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಕೆಲಸಮಾಡುವ ಮನೋವಿಜ್ಞಾನಿಗಳಿರಬಹುದು. ಜರ್ಮನಿಯಿಂದ ಅಮೇರಿಕಾಗೆ ವಲಸೆ ಬಂದಿದ್ದ ಹ್ಯೂಗೋ ಮುನ್ಸ್ಟರ್‌ಬರ್ಗ್ 1907 ರಿಂದ 1926 ಒಳಗೆ ಮನೋವಿಜ್ಞಾನವನ್ನು ಅಪರಾಧ ಪತ್ತೆ, ಕಾನೂನು, ವ್ಯಾಪಾರ, ಕೈಗಾರಿಕೆ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಉಪಯೋಗಿಸುವ ಬಗ್ಗೆ ಗ್ರಂಥಗಳನ್ನು ರಚಿಸಿದ. ಹೀಗಾಗಿ ಈ ಕ್ಷೇತ್ರದ ಹುಟ್ಟಿಗೆ ಕಾರಣರಾದ ಅನೇಕರಲ್ಲಿ ಇವನ ಹೆಸರು ಮೊದಲು ಉಲ್ಲೇಖಗೊಳ್ಳುತ್ತದೆ. ಈ ಕ್ಷೇತ್ರದ ಕೆಲವು ಶಾಖೆಗಳು ಹೀಗಿವೆ:

**ಅಪಸಾಮಾನ್ಯ ಮನೋವಿಜ್ಞಾನ**: ಈ ಕ್ಷೇತ್ರ ಅಪಸಾಮಾನ್ಯ ವರ್ತನೆಯ ಕಾರಣಗಳು, ಅವುಗಳ ವಿಧಗಳು, ಅವು ಅಭಿವ್ಯಕ್ತಗೊಳ್ಳುವ ರೀತಿ ಮತ್ತು ಅವನ್ನು ನಿವಾರಿಸುವ ವಿಧಾನಗಳನ್ನು ಅಧ್ಯಯನ ಮಾಡುತ್ತದೆ.

**ನೈದಾನಿಕ ಮನೋವಿಜ್ಞಾನ** ಅಪಸಾಮಾನ್ಯತೆಯ ಬಗ್ಗೆ ಇರುವ ಜ್ಞಾನ ಮತ್ತು ಸಂಶೋಧನಾ ಮಾಹಿತಿಯನ್ನು ಮಾನಸಿಕ ತೊಂದರೆ ಇರುವ ವ್ಯಕ್ತಿಗಳಿಗೆ ಸಹಾಯ ಮಾಡಲು, ಅವರ ಅಪಸಾಮಾನ್ಯ ಆಲೋಚನೆ, ಸಂವೇಗ ಮತ್ತು ವರ್ತನೆಗಳನ್ನು ಬದಲಿಸಲು ಉಪಯೋಗಿಸುತ್ತದೆ. ಅಂದರೆ, ಇದು ಅಪಸಾಮಾನ್ಯ ಮನೋವಿಜ್ಞಾನದ ಅನ್ವಯಿಕ ರೂಪವಾಗಿದ್ದು ಇದರ ಗುರಿ, ಮಾನಸಿಕ ತೊಂದರೆಗಳ ತಡೆ, ನಿವಾರಣೆ ಮತ್ತು ಮಾನಸಿಕ ಆರೋಗ್ಯವನ್ನು ಉತ್ತಮಪಡಿಸುವುದಾಗಿದೆ. ಅಪಸಾಮಾನ್ಯತೆಗೆ ಒತ್ತು ಕೊಡುವ ಬದಲು, ಆರೋಗ್ಯ, ಸಂತಸ, ಆಶಾವಾದ ಮುಂತಾದ ಜೀವೋನ್ಮುಖಿ ಪ್ರಕ್ರಿಯೆಗಳನ್ನು ಅಧ್ಯಯನ ಮಾಡುವ **ಸಕಾರಾತ್ಮಕ ಮನೋವಿಜ್ಞಾನ** ಈ ಕ್ಷೇತ್ರದಲ್ಲಿನ ಹೊಸ ಬೆಳವಣಿಗೆ.

**ಶಾರೀರಿಕ ಅಥವಾ ಜೈವಿಕ ಮನೋವಿಜ್ಞಾನ** ವರ್ತನೆಯ ದೈಹಿಕ ಮೂಲಗಳನ್ನು ಪರೀಕ್ಷಿಸುತ್ತದೆ ಹಾಗೂ ಮಾನಸಿಕ ಕ್ರಿಯೆಗಳಿಂದ ಉಂಟಾಗುವ ಶಾರೀರಿಕ ಮತ್ತು ರಾಸಾಯನಿಕ ಬದಲಾವಣೆಗಳನ್ನು ಸಂಶೋಧಿಸುತ್ತದೆ. **ನರಮನೋವಿಜ್ಞಾನ** (Neuropsychology) ಎಂಬ ಇದರ ಉಪಶಾಖೆ ಮಿದುಳಿನ ರಚನೆಗೂ ವರ್ತನೆಗೂ ಇರುವ ಸಂಬಂಧ ಮತ್ತು ನರಗಳ ವಿದ್ಯುತ್ ಪ್ರಕ್ರಿಯೆಗಳನ್ನು ಅಧ್ಯಯನದ ಕೇಂದ್ರವಾಗಿಟ್ಟುಕೊಂಡಿರುತ್ತದೆ.

**ಸಂಜ್ಞಾನಾತ್ಮಕ ಮನೋವಿಜ್ಞಾನ** 1960 ರಿಂದಾಚೆಗೆ ಬಹಳ ವೇಗವಾಗಿ ಬೆಳೆಯುತ್ತಿರುವ ಕ್ಷೇತ್ರವಾಗಿದ್ದು ಸ್ಮೃತಿ, ನಿರ್ಣಯ, ಸಮಸ್ಯಾ ಪರಿಹಾರ, ಅಭಿಪ್ರೇರಣೆ, ಆಲೋಚನೆ ಮುಂತಾದ ಆಂತರಿಕ ಮತ್ತು ಸಂಜ್ಞಾನಾತ್ಮಕ ಕ್ರಿಯೆಗಳನ್ನು ಅಧ್ಯಯನ ಮಾಡುತ್ತದೆ.

**ವಿಕಾಸಾತ್ಮಕ ಮನೋವಿಜ್ಞಾನ** ಜೀವಿಯ ಉತ್ಪತ್ತಿ, ಬೆಳವಣಿಗೆ ಮತ್ತು ಜೀವಮಾನದುದ್ದಕ್ಕೂ ಆಗುವ ದೈಹಿಕ, ಮಾನಸಿಕ, ಸಾಮಾಜಿಕ ಬದಲಾವಣೆಗಳನ್ನು ಅಧ್ಯಯನ ಮಾಡುತ್ತದೆ. ಈ ಶಾಖೆಯಲ್ಲಿ ಶಿಶು ಮನೋವಿಜ್ಞಾನ ಶೈಶವಕ್ಕೆ ಪ್ರಾಧಾನ್ಯತೆ ನೀಡುತ್ತದೆ. ಪ್ರೌಢ ಮನೋವಿಜ್ಞಾನ ಯುವಾವಸ್ಥೆ ದಾಟಿದ ಮೇಲಿನ ಮಾನಸಿಕ ಪ್ರಕ್ರಿಯೆಗಳು, ಸಮಸ್ಯೆಗಳಿಗೆ ಗಮನ ನೀಡುತ್ತದೆ. ವೃದ್ಧಾಪ್ಯಕ್ಕೆ ಸಂಬಂಧಿಸಿದ ಮನೋವಿಜ್ಞಾನ ಇಳಿವಯಸ್ಸಿನ ಮನೋ-ಸಾಮಾಜಿಕ, ದೈಹಿಕ ವಿಕಾಸ ಮತ್ತು ಸಮಸ್ಯೆಗಳನ್ನು ಅಧ್ಯಯನ ಮಾಡುತ್ತದೆ. ಇತ್ತೀಚೆಗೆ, ಮನೋವಿಜ್ಞಾನಿಗಳು **"ಜೀವಿತಾವಧಿ (life span) ಮನೋವಿಜ್ಞಾನ"** ಎಂಬ ಶೀರ್ಷಿಕೆಯಡಿ ಹುಟ್ಟಿನಿಂದ ಸಾವಿನವರೆಗೂ ನಡೆಯುವ ಎಲ್ಲಾ ಬದಲಾವಣೆಗಳು, ಮಾನವ ವರ್ತನೆಯನ್ನು ಸಮಗ್ರವಾಗಿ ಒಟ್ಟುಗೂಡಿಸುತ್ತಾರೆ. ಇದು ಮೇಲೆ ಹೇಳಿದ ಮೂರೂ ಶಾಖೆಗಳನ್ನೂ ಒಳಗೊಂಡಿರುತ್ತದೆ.

**ತೌಲನಿಕ ಮನೋವಿಜ್ಞಾನ** ಪ್ರಾಣಿಗಳ ಮತ್ತು ಮಾನವರ ವರ್ತನೆಯ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಅಧ್ಯಯನ ಮಾಡುತ್ತದೆ. ಪ್ರಾಣಿಗಳ ಅಧ್ಯಯನ ಮತ್ತು ಅವುಗಳ ಮೇಲಿನ ಸಂಶೋಧನೆ ಮಾನವ ವರ್ತನೆಯ ಜ್ಞಾನವನ್ನು ಹೆಚ್ಚಿಸಬಹುದು ಎಂದು ಭಾವಿಸಲಾಗಿದೆ.

**ಪ್ರಯೋಗಾತ್ಮಕ ಮನೋವಿಜ್ಞಾನ** ಮೂಲಭೂತವಾದ ಮಾನಸಿಕ ಪ್ರಕ್ರಿಯೆಗಳನ್ನು ಮತ್ತು ವರ್ತನೆಗಳನ್ನು ಪ್ರಯೋಗಗಳಿಗೆ ಒಳಪಡಿಸುತ್ತಲ್ಲದೆ ವೈಜ್ಞಾನಿಕ ವಿಧಾನಗಳನ್ನು ಮಿದುಳು ಮತ್ತು ವರ್ತನೆಯ ಸಂಶೋಧನೆಗೆ ಬಳಸಿಕೊಳ್ಳುತ್ತದೆ.

**ಸಾಮಾಜಿಕ ಮನೋವಿಜ್ಞಾನ**: ಸರಳವಾಗಿ ಹೇಳುವುದೆಂದರೆ ಇದು ಮಾನವ ವರ್ತನೆಯ ಮೇಲೆ ಸಮಾಜದ ಪ್ರಭಾವವನ್ನು ವಿಶ್ಲೇಷಿಸುತ್ತದೆ. ವ್ಯಕ್ತಿ ಮತ್ತು ಗುಂಪುಗಳ ವರ್ತನೆಯನ್ನು ಸಾಮಾಜಿಕ ಕಾರಕಗಳು ಹೇಗೆ ನಿರ್ಧರಿಸುತ್ತವೆ ಎಂದು ವೈಜ್ಞಾನಿಕವಾಗಿ ಅಧ್ಯಯನ ಮಾಡುತ್ತದೆ.

**ಔದ್ಯೋಗಿಕ ಮತ್ತು ಸಂಘಟನಾ ವರ್ತನಾ ಮನೋವಿಜ್ಞಾನ**: ವಿಶಾಲವಾದ ಈ ಕ್ಷೇತ್ರದಲ್ಲಿ ಕೆಲಸ, ವೃತ್ತಿ, ಉದ್ಯಮಶೀಲತೆ, ಬಳಕೆದಾರರ ವರ್ತನೆ, ಜಾಹೀರಾತು ಮೊದಲಾದ ವಿಷಯಗಳನ್ನೇ ಕೇಂದ್ರವಾಗಿಟ್ಟುಕೊಂಡ ಉಪಶಾಖೆಗಳಿವೆ. ಒಟ್ಟಿನಲ್ಲಿ ಕಾರ್ಯಕ್ಷೇತ್ರದಲ್ಲಿ ಕೆಲಸಗಾರರ ಆಯ್ಕೆ, ತರಬೇತಿ, ಕೆಲಸಗಾರರ ನಡುವಿನ ಸಂಬಂಧ, ನಾಯಕತ್ವ, ಘರ್ಷಣೆ, ಉತ್ಪಾದನೆಯನ್ನು ಮತ್ತು ಕೆಲಸಗಾರರ ಮನೋಸಾಮರ್ಥ್ಯವನ್ನು ಹೆಚ್ಚಿಸುವುದು, ಸಂಘಟನೆಯ ಸುವ್ಯವಸ್ಥೆ ಮುಂತಾದ ಉದ್ಯಮಗಳಿಗೆ ಸಂಬಂಧಿಸದ ವಿಷಯಗಳನ್ನು ಅಧ್ಯಯನ ಮಾಡಲಾಗುತ್ತದೆ. ಈ ವಿಷಯಕ್ಕೆ ಸಂಬಂಧಿಸಿದ ಇತರ ನವಶಾಖೆಗಳಾದ ಮಾನವಾಂಶ ಮನೋವಿಜ್ಞಾನ ಯಂತ್ರಗಳು ಮತ್ತು ಮಾನವರ ನಡುವಿನ ಸಂಬಂಧವನ್ನು ಅಧ್ಯಯನ ಮಾಡುತ್ತದೆ. ಮಾನವಾಂಶ ಇಂಜಿನಿಯರಿಂಗ್ ಯಂತ್ರಗಳನ್ನು ಸುಲಭವಾಗಿ ಮತ್ತು ಆರಾಮವಾಗಿ ಮಾನವರು ಬಳಸಲು ಸಿದ್ಧಪಡಿಸುತ್ತದೆ. ನಿರ್ವಹಣಾ ಮನೋವಿಜ್ಞಾನ ಎಕ್ಸೆಕ್ಯುಟಿವ್ ಮತ್ತು ಮ್ಯಾನೇಜರ್ ಹುದ್ದೆಗಳಲ್ಲಿರುವವರು ಮನೋವಿಜ್ಞಾನದ ಜ್ಞಾನ ಬಳಸಿಕೊಂಡು ತಮ್ಮ ಪಾತ್ರಗಳನ್ನು ಸರಿಯಾಗಿ ನಿರ್ವಹಿಸಲು ಕಲಿಸಿಕೊಡುತ್ತದೆ.

**ಶೈಕ್ಷಣಿಕ ಮನೋವಿಜ್ಞಾನ**: ಕಲಿಯುವ ಮತ್ತು ಕಲಿಸುವ ವರ್ತನೆಯ ಮನೋವಿಜ್ಞಾನ ಎಂದು ಇದನ್ನು ಕರೆಯಬಹದು. ಬೋಧನಾಕ್ರಮ, ಪರೀಕ್ಷಾಕ್ರಮ, ಉತ್ತಮ ಕಲಿಕೆ, ಅಭಿಪ್ರೇರಣೆ ಮುಂತಾದ ವಿಷಯಗಳನ್ನು ಅಧ್ಯಯನ ಮಾಡುತ್ತದೆ. ಶಾಲಾ ಮನೋವಿಜ್ಞಾನ ಶಾಲಾ ಮಕ್ಕಳಲ್ಲಿ ಕಂಡುಬರುವ ಕಲಿಕೆ, ಭಾವನಾತ್ಮಕ ಮತ್ತು ವರ್ತನೆಯ ಸಮಸ್ಯೆಗಳಿಗೆ ಶೈಕ್ಷಣಿಕ ಮತ್ತು ನೈದಾನಿಕ ಕ್ಷೇತ್ರಗಳ ಜ್ಞಾನ ಉಪಯೋಗಿಸಿ ಪರಿಹಾರ ಹುಡುಕುತ್ತದೆ. ಶಾಲಾ ಮನೋವಿಜ್ಞಾನಿಗಳು ಪಾಲಕರು, ಶಿಕ್ಷಕರ ಸಹಕಾರದೊಡನೆ ಮಕ್ಕಳ ಸಮಸ್ಯೆಗಳನ್ನು ಗುರುತಿಸುವುದು, ಅಲ್ಪಕಾಲೀನ

ಚಿಕಿತ್ಸೆಗಳನ್ನು ರೂಪಿಸುವುದು ಮತ್ತು ಜೀವನಕೌಶಲ್ಯಗಳನ್ನು ಕಲಿಸುವುದನ್ನು ಮಾಡುತ್ತಾರೆ.

**ಆರೋಗ್ಯ ಮನೋವಿಜ್ಞಾನ**: ಈ ಶಾಖೆಗೆ, ವರ್ತನಾ ವೈದ್ಯಕೀಯ, ವೈದ್ಯಕೀಯ ಮನೋವಿಜ್ಞಾನ ಎಂಬ ಹೆಸರುಗಳೂ ಬಳಕೆಯಲ್ಲಿವೆ. ಇಲ್ಲಿ ರೋಗಕ್ಕಿಂತಾ ರೋಗ ಉಳ್ಳ ವ್ಯಕ್ತಿಯ ಬಗ್ಗೆ ಆಸಕ್ತಿ ಹೆಚ್ಚು. ರೋಗಿಯ ವ್ಯಕ್ತಿತ್ವ, ವರ್ತನೆ, ಪರಿಸರ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾರಕಗಳನ್ನು, ರೋಗ ಮತ್ತು ರೋಗಕ್ಕೆ ವ್ಯಕ್ತಿ ಸ್ಪಂದಿಸುವುದನ್ನು ಅಧ್ಯಯನ ಮಾಡಲಾಗುತ್ತದೆ.

**ಕ್ರೀಡಾ ಮನೋವಿಜ್ಞಾನ**: ಇದು ಅಂತರಶಾಸ್ತ್ರೀಯ ಕ್ಷೇತ್ರವಾಗಿದ್ದು ದೇಹಚಲನಶಾಸ್ತ್ರ (kinesiology) ಮತ್ತು ಮನೋವಿಜ್ಞಾನ ಎರಡನ್ನೂ ಬಳಸಿಕೊಂಡು ಕ್ರೀಡಾಪಟುಗಳ ಸಾಧನೆಯನ್ನು ಮಾನಸಿಕ ಕಾರಕಗಳು ಹೇಗೆ ಪ್ರಭಾವಿಸುತ್ತವೆ ಎಂದು ಅಧ್ಯಯನ ಮಾಡುತ್ತದೆ. ಅಲ್ಲದೆ ಸ್ಪರ್ಧೆಗೆ ಮಾನಸಿಕ ತಯಾರಿ, ತಂಡಗಳನ್ನು ಕಟ್ಟುವುದು, ಒತ್ತಡ ನಿವಾರಿಸುವುದು, ಸಾಧನೆಗೆ ಬೇಕಾದ ಕೌಶಲಗಳನ್ನು ಕಲಿಸುವುದು, ಗಾಯ ಅಥವಾ ಅಪಘಾತಕ್ಕೆ ಒಳಗಾದ ಆಟಗಾರರ ಪುನಶ್ಚೇತನ ಮುಂತಾದ ಕೆಲಸಗಳನ್ನು ಕ್ರೀಡಾ ಮನೋವಿಜ್ಞಾನಿಗಳು ಮಾಡುತ್ತಾರೆ.

**ನ್ಯಾಯಾಂಗ ಮನೋವಿಜ್ಞಾನ**: ಇದು ಕಾನೂನು ಮನೋವಿಜ್ಞಾನ ಮತ್ತು ಅಪರಾಧಶಾಸ್ತ್ರ (criminology) ಇವೆರೆಡರ ಜ್ಞಾನವನ್ನೂ ಉಪಯೋಗಿಸಿಕೊಳ್ಳುತ್ತದೆ. ಈ ಕ್ಷೇತ್ರದ ಪರಿಣಿತರು ನ್ಯಾಯಾಧೀಶರು, ವಕೀಲರು, ಪೋಲೀಸರು ಮುಂತಾದವರ ಜೊತೆ ಕೆಲಸ ಮಾಡುತ್ತಾರೆ. ಅಪರಾಧ ವಿಚಾರಣೆಯಲ್ಲಿ ಸಾಕ್ಷಿ ಹೇಳುವುದು, ಮಕ್ಕಳಿಗೆ ಸಂಬಂಧಿಸಿದ ವಿಚಾರಣೆಯಲ್ಲಿ ಸಹಾಯಮಾಡುವುದು, ಅಪರಾಧಿಗಳ ಮಾನಸಿಕ ಕ್ಷಮತೆಯನ್ನು ನಿರ್ಧರಿಸುವುದು ಇವೇ ಮುಂತಾದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**ಪರಿಸರ ಮನೋವಿಜ್ಞಾನ**: ಇದೊಂದು ಅಂತರಶಾಸ್ತ್ರೀಯ ಕ್ಷೇತ್ರವಾಗಿದೆ. ಮಾನವ ಮತ್ತು ವಾತಾವರಣದ ನಡುವಿನ ಸಂಬಂಧ, ಈ ಶಾಖೆಯ ಕೇಂದ್ರ ವಸ್ತುವಿಷಯ. ಸಹಜ ವಾತಾವರಣ, ಸಾಮಾಜಿಕ ಪರಿಸರ, ಮಾನವ ನಿರ್ಮಿತ ವಾತಾವರಣ, ಕಲಿಕೆಯ ಸನ್ನಿವೇಶ - ಹೀಗೆ ಪರಿಸರ ಮಾನವ ವರ್ತನೆಯ ಮೇಲೆ ಬೀರುವ ಪ್ರಭಾವವನ್ನು ಅರಿತು, ಪರಿಸರದಿಂದ ಆಗಬಹುದಾದ ಹಾನಿ ತಪ್ಪಿಸಲು ಮತ್ತು ಉತ್ತಮ ಪರಿಸರ ನಿರ್ಮಿಸಲು ಈ ಶಾಖೆ ನೆರವಾಗುತ್ತದೆ.

**ಪರಾಮರ್ಶನ ಮನೋವಿಜ್ಞಾನ**: ಇದು ವ್ಯಕ್ತಿಯ ಸಾಮಾಜಿಕ, ಭಾವನಾತ್ಮಕ, ಶೈಕ್ಷಣಿಕ, ವೃತ್ತಿ, ಆರೋಗ್ಯಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಸಹಾಯ ಒದಗಿಸುವ ಅನ್ವಯಿಕ ಶಾಖೆ. ಸಾಧಾರಣ ಜನರು ಎದುರಿಸುವ ಸಾಮಾನ್ಯ ಸಮಸ್ಯೆಗಳಿಗೆ ನೈಪುಣ್ಯತೆ

ಹೊಂದಿರುವ ಪರಾಮರ್ಶಕರು ಪರಿಹಾರ ಕಂಡುಕೊಳ್ಳಲು ನೆರವು ನೀಡುತ್ತಾರೆ. ಈ ಶಾಖೆಯಲ್ಲಿ ಮುಖ್ಯವಾದ ವಿಷಯವನ್ನು ಆಧರಿಸಿ ಶೈಕ್ಷಣಿಕ, ವೈವಾಹಿಕ, ಔದ್ಯೋಗಿಕ, ಭಾವನಾತ್ಮಕ ಮುಂತಾದ ಪರಾಮರ್ಶನ ವಿಧಗಳಿವೆ.

ಇವಲ್ಲದೆ ಮನೋವಿಜ್ಞಾನಿಗಳು ಕೆಲಸಮಾಡುವ ಸನ್ನಿವೇಶವನ್ನಾಧರಿಸಿ ಸಮುದಾಯ, ಮಿಲಿಟರಿ, ಬಾಹ್ಯಾಕಾಶ, ವಾಸ್ತುಶಿಲ್ಪ ಮನೋವಿಜ್ಞಾನ; ಅಧ್ಯಯನ ಮಾಡುವ ಗುಂಪುಗಳನ್ನಾಧರಿಸಿ ಸ್ತ್ರೀವಾದಿ, ವರ್ಣೀಯರು(people of color), ಅಂತರಸಂಸ್ಕೃತಿ, ಅಲ್ಪಸಂಖ್ಯಾತರ ಮನೋವಿಜ್ಞಾನ; ಪ್ರದೇಶಗಳನ್ನಾಧರಿಸಿ ಭಾರತೀಯ, ಪ್ರಾಚ್ಯ ಮನೋವಿಜ್ಞಾನ - ಹೀಗೆ ಉಪಶಾಖೆಗಳು ಹುಟ್ಟಿಕೊಳ್ಳುತ್ತಿವೆ. ಮುಂದಿನ ಪುಟಗಳಲ್ಲಿ ಕೆಲವು ಶಾಖೆಗಳ ಬಗ್ಗೆ ಮಾಹಿತಿ ನೀಡಲಾಗಿದೆ.